# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಡಿಸೆಂಬರ್ ೧, ೨೦೧೬ (ಮಾರ್ಗಶಿರ ೧೦, ಶಕ ವರ್ಷ ೧೯೩೮)<br>Bengaluru, Thursday, December 1, 2016 (Margashira 10, Shaka Varsha 1938) | ಸಂಚಿಕೆ ೪೭<br>Issue 47 |
|---|---|---|

## ಭಾಗ ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಅಧ್ಯಕ್ಷರು, ಭೂಮಾಪನ ಇಲಾಖೆ, ನೇರ ನೇಮಕಾತಿ ಸಮಿತಿ ಹಾಗೂ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು.**

**ಅಧಿಸೂಚನೆ**

**ಸಂಖ್ಯೆ: SSLR/EST/REC/REC-002/16-17, ದಿನಾಂಕ 05.11.2016.**

1. ಕರ್ನಾಟಕ ನಾಗರಿಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ಮತ್ತು 2015ರ ತಿದ್ದುಪಡಿ ನಿಯಮಗಳನ್ವಯ ಹಾಗೂ ಭೂಮಾಪನ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಭೂಮಾಪನ ಇಲಾಖೆಯಲ್ಲಿ ನೇರ ನೇಮಕಾತಿಯಿಂದ ಭರ್ತಿ ಮಾಡಬೇಕಾದ 1067 ಭೂಮಾಪಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆನ್ ಲೈನ್ (Online) ಮುಖಾಂತರ ಅಹ್ವಾನಿಸಲಾಗಿದೆ.

| ಹುದ್ದೆ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|
| ಭೂಮಾಪಕ | ₹.12500–250–13000–300–14200–350–15600–400–17200–450–19000–500–21000–600–24000 | 1067 |

2. ಇಲಾಖೆಯ ಕಿರು ಪರಿಚಯ ಮತ್ತು ಹುದ್ದೆಯ ಕರ್ತವ್ಯ ಹಾಗೂ ಜವಾಬ್ದಾರಿಯ ಬಗ್ಗೆ ಅನುಬಂಧ–1 ರಲ್ಲಿ ವಿವರಿಸಿದೆ.

3. **ಅರ್ಜಿ ಸಲ್ಲಿಸಲು ಮತ್ತು ಅರ್ಜಿ ಶುಲ್ಕ ಪಾವತಿಸಲು ಕಾಲಾವಧಿ**

| ಕ್ರ.ಸಂ. | ವಿಷಯ | ದಿನಾಂಕ |
|---|---|---|
| 1 | ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ | 07.11.2016 |
| 2 | ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | 09.12.2016 |

4. **ಶೈಕ್ಷಣಿಕ ವಿದ್ಯಾರ್ಹತೆ:–**

a. ಭಾರತದಲ್ಲಿ ಕಾನೂನು ರೀತ್ಯ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದಲ್ಲಿ ಬಿ.ಇ. (ಸಿವಿಲ್) / ಅಥವಾ ಬಿ.ಟೆಕ್. (ಸಿವಿಲ್) / ಅಥವಾ ಸಿವಿಲ್ ಇಂಜಿನಿಯರಿಂಗ್ ಡಿಪ್ಲೋಮಾದಲ್ಲಿ ಉತ್ತೀರ್ಣರಾಗಿರಬೇಕು.

**ಅಥವಾ**

b. ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ.) ಅಥವಾ ಕೇಂದ್ರ ಪ್ರೌಢ ಶಿಕ್ಷಣ ಮಂಡಳಿ ಜರುಗಿಸುವ 12ನೇ ತರಗತಿ (ಸಿ.ಬಿ.ಎಸ್.ಇ.) ಅಥವಾ ಐ.ಸಿ.ಎಸ್.ಇ. ಇವುಗಳಲ್ಲಿ ವಿಜ್ಞಾನ ವಿಷಯವನ್ನು ಪಡೆದು ಗಣಿತ ವಿಷಯದಲ್ಲಿ 60% ಕ್ಕಿಂತ ಕಡಿಮೆ ಇಲ್ಲದಂತೆ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

**ಅಥವಾ**

c. ಕರ್ನಾಟಕ ರಾಜ್ಯ ಸರ್ಕಾರದ ವೃತ್ತಿ ಶಿಕ್ಷಣ ಇಲಾಖೆ ನಡೆಸುವ "ಲ್ಯಾಂಡ್ ಅಂಡ್ ಸಿಟಿ ಸರ್ವೆ" ಯ ಪದವಿಪೂರ್ವ ಡಿಪ್ಲೊಮೊದಲ್ಲಿ ಉತ್ತೀರ್ಣರಾಗಿರಬೇಕು.

**ಅಥವಾ**

d. ಕರ್ನಾಟಕ ಸರ್ಕಾರದ ಉದ್ಯೋಗ ಹಾಗೂ ತರಬೇತಿ ಇಲಾಖೆ ನಡೆಸುವ "ಐ.ಟಿ.ಐ. ಇನ್ ಸರ್ವೆ ಟ್ರೇಡ್" ನಲ್ಲಿ ಉತ್ತೀರ್ಣರಾಗಿರಬೇಕು.

ಹುದ್ದೆಗೆ ನಿಗಧಿಪಡಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಸೂಚಿಸಿರುವ ಕೊನೆಯ ದಿನಾಂಕದೊಳಗೆ ಹೊಂದಿರಬೇಕು ಅಂದರೆ ಕೊನೆಯ ದಿನಾಂಕದೊಳಗೆ ಸಂಬಂಧಿಸಿದ ಪ್ರಾಧಿಕಾರದ ಫಲಿತಾಂಶ ಪ್ರಕಟಿಸಿರಬೇಕು.

5. **ಹುದ್ದೆಗಳ** ವರ್ಗೀಕರಣ:-

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸೇಹಿಮ 95 ದಿನಾಂಕ: 20-06-1995.

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಅಂ.ವಿ. | ಕ.ಮಾ.ಅ. | ಯೋ.ನಿ.ಅ. | ಒಟ್ಟು |
|---|---|---|---|---|---|---|---|---|
| ಪ.ಜಾ. | 26 | 48 | 37 | 16 | 12 | 9 | 7 | 155 |
| ಪ.ಪಂ. | 7 | 8 | 10 | 4 | 2 | 2 | 3 | 36 |
| ಪ್ರ-1 | 7 | 9 | 11 | 5 | 3 | 2 | 2 | 39 |
| ಪ್ರ-2(ಎ) | 28 | 47 | 39 | 17 | 12 | 11 | 5 | 159 |
| ಪ್ರ-2(ಬಿ) | 8 | 12 | 10 | 5 | 5 | 1 | 3 | 44 |
| ಪ್ರ-3(ಎ) | 8 | 13 | 9 | 7 | 4 | 1 | - | 42 |
| ಪ್ರ-3(ಬಿ) | 8 | 16 | 12 | 6 | 6 | 3 | 3 | 54 |
| ಸಾಮಾನ್ಯ ಅಭ್ಯರ್ಥಿ | 100 | 161 | 134 | 57 | 34 | 27 | 25 | 538 |
| **ಒಟ್ಟು** | **192** | **314** | **262** | **117** | **78** | **56** | **48** | **1067** |

ಮಾ.ಸೈ. – ಮಾಜಿ ಸೈನಿಕ ಅಭ್ಯರ್ಥಿ

ಅಂ.ವಿ. – ಅಂಗವಿಕಲ ಅಭ್ಯರ್ಥಿ

ಕ.ಮಾ.ಅ. – ಕನ್ನಡ ಮಾಧ್ಯಮ ಅಭ್ಯರ್ಥಿ

ಯೋ.ನಿ.ಅ. – ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ

6. **ಆನ್ ಲೈನ್ ಅರ್ಜಿ ಸಲ್ಲಿಸುವ ಕುರಿತು ಪ್ರಮುಖ ಸೂಚನೆಗಳು:-**

- ಅಭ್ಯರ್ಥಿಗಳು ಒಂದೇ ಅರ್ಜಿ ಸಲ್ಲಿಸತಕ್ಕದ್ದು. ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಮುನ್ಸೂಚನೆಯಿಲ್ಲದೆ ತಿರಸ್ಕರಿಸಲಾಗುವುದು.
- ಅರ್ಜಿಗಳನ್ನು ಆನ್ ಲೈನ್ (Online) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.
- ಅಭ್ಯರ್ಥಿಗಳು ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಕಡ್ಡಾಯವಾಗಿ ನೀಡಿರುವ ಸೂಚನೆಗಳನ್ನು ಓದಿಕೊಳ್ಳತಕ್ಕದ್ದು ಹಾಗೂ ನೀಡಿರುವ ಸೂಚನೆಗಳನ್ವಯ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಇಲಾಖೆಯು ಕಾನೂನಿನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.

- ಅಧಿಸೂಚನೆಯಲ್ಲಿ / ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು.

| | | | |
|---|---|---|---|
| ಸಾ.ಅ. | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ. | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ. | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ.ವ–1 | ಪ್ರವರ್ಗ–1 | Cat-1 | Category-1 |
| ಪ್ರ.ವ–2ಎ | ಪ್ರವರ್ಗ–2ಎ | 2A | Category-2A |
| ಪ್ರ.ವ–2ಬಿ | ಪ್ರವರ್ಗ–2ಬಿ | 2B | Category-2B |
| ಪ್ರ.ವ–3ಎ | ಪ್ರವರ್ಗ–3ಎ | 3A | Category-3A |
| ಪ್ರ.ವ–3ಬಿ | ಪ್ರವರ್ಗ–3ಬಿ | 3B | Category-3B |
| ಮಾ.ಸೈ. | ಮಾಜಿ ಸೈನಿಕ | Ex-MP | Ex-Military Person |
| ಅಂ.ವಿ. | ಅಂಗವಿಕಲ | PH | Physically Handicapped Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |
| ಕ.ಮಾ.ಅ. | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಯೋ.ನಿ.ಅ. | ಯೋಜನೆಯಿಂದ ನಿರಾಶ್ರಿತ ಅಭ್ಯರ್ಥಿ | PDP | Project Displaced Person |

7. ಶುಲ್ಕ:–

| | |
|---|---|
| ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕರುಗಳಿಗೆ | ₹..300=00 |
| ಸಾಮಾನ್ಯ ವರ್ಗ, ಪ್ರವರ್ಗ–2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ | ₹. 500=00 |

ಅಭ್ಯರ್ಥಿಗಳು ನಾಡ ಕಛೇರಿಯ ಅಟಲ್ ಜಿ ಜನಸ್ನೇಹಿ ಕೇಂದ್ರಗಳಲ್ಲಿ ತಮ್ಮ ಚುನಾವಣಾ ಗುರುತಿನ ಚೀಟಿ ಅಥವಾ ಆಧಾರ್ ಗುರುತಿನ ಚೀಟಿ ನೀಡಿ ನಿಗಧಿತ ಶುಲ್ಕವನ್ನು ಪಾವತಿಸಿ ವಿಶಿಷ್ಟ ಅರ್ಜಿ ಸಂಖ್ಯೆಯನ್ನು (Application ID) ಹೊಂದಿರುವ ಸ್ವೀಕೃತಿ ಪತ್ರ ಪಡೆಯಬೇಕು. ವಿಶಿಷ್ಟ ಅರ್ಜಿ ಸಂಖ್ಯೆ (Application ID) ಇಲ್ಲದೆ ಇದ್ದಲ್ಲಿ ಆನ್ ಲೈನ್ ಅರ್ಜಿ ತೆರೆಯುವುದಿಲ್ಲ.

**ಸೂಚನೆ:–** ಶುಲ್ಕ ಪಾವತಿಸುವಾಗ ತಮ್ಮ ಆಧಾರ್ ಕಾರ್ಡ್, ಚುನಾವಣಾ ಗುರುತಿನ ಚೀಟಿ, ಜಾತಿ ಪ್ರಮಾಣ ಪತ್ರ, ಅಂಗವಿಕಲ ಪ್ರಮಾಣ ಪತ್ರ ಮತ್ತು ಮಾಜಿ ಸೈನಿಕರ ಪ್ರಮಾಣ ಪತ್ರಗಳನ್ನು (ಅನ್ವಯವಾಗುವ ಪ್ರಮಾಣ ಪತ್ರಗಳು) ತಪ್ಪದೆ ಹಾಜರುಪಡಿಸಬೇಕು. ಈ ಮಾಹಿತಿಗಳು ಅರ್ಜಿಯಲ್ಲಿ ದಾಖಲಾಗುವುದು. ಈ ರೀತಿ ದಾಖಲಾದ ಮಾಹಿತಿಯನ್ನು Edit ಮಾಡಲು ಅವಕಾಶ ಇರುವುದಿಲ್ಲ. ಆದುದರಿಂದ ತಪ್ಪು ದಾಖಲೆ / ಮಾಹಿತಿಗಳನ್ನು ನೀಡಿ ಶುಲ್ಕ ಪಾವತಿಸಿದಲ್ಲಿ ಈ ಮೊತ್ತವನ್ನು ಯಾವುದೇ ಸಂದರ್ಭದಲ್ಲಿ ಅಭ್ಯರ್ಥಿಗೆ ಹಿಂದಿರುಗಿಸುವುದಾಗಲೀ ಅಥವಾ ಬೇರೆ ಅರ್ಜಿಗೆ ಹೊಂದಾಣಿಕೆ ಮಾಡಿಕೊಳ್ಳಲು ಅವಕಾಶವಿರುವುದಿಲ್ಲವಾದ ಕಾರಣ, ಶುಲ್ಕ ಪಾವತಿಸುವಾಗ ಎಚ್ಚರಿಕೆಯಿಂದ ಮಾಹಿತಿ / ದಾಖಲೆಗಳನ್ನು ನೀಡಲು ಸೂಚಿಸಿದೆ. ಶುಲ್ಕ ಪಾವತಿಸಿದ ಸ್ವೀಕೃತಿ ಪತ್ರವನ್ನು ಸ್ಥಳದಲ್ಲಿಯೇ ಪರಿಶೀಲಿಸಿಕೊಳ್ಳಲು ಸಹ ಸೂಚಿಸಿದೆ.

8. **ಅರ್ಜಿಯನ್ನು ಆನ್ ಲೈನ್ ಮುಖೇನ ಸಲ್ಲಿಸುವ ವಿಧಾನ:–**

**ಹಂತ 1:–** ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು landrecords.karnataka.gov.in ವೆಬ್ ಸೈಟ್ ವಿಳಾಸವನ್ನು ತೆರೆದು Land Surveyor Selection – 2016 ಎಂಬ ಲಿಂಕ್ ನ್ನು ಕ್ಲಿಕ್ ಮಾಡಿದಾಗ, ಅಧಿಸೂಚನೆ (Notification) ಮತ್ತು Online Application ಗಳು ಮೂಡುತ್ತದೆ. ಅಧಿಸೂಚನೆಯನ್ನು ಡೌನ್ ಲೋಡ್ ಮಾಡಿಕೊಳ್ಳಲು ಅವಕಾಶವಿರುತ್ತದೆ. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಧಿಸೂಚನೆಯನ್ನು ಓದಿ ಅರ್ಥೈಸಿಕೊಳ್ಳತಕ್ಕದ್ದು.

**ಹಂತ 2:–** ಅರ್ಜಿ ಸಲ್ಲಿಸುವ ಮುನ್ನ ಅಭ್ಯರ್ಥಿಗಳು ನಾಡ ಕಛೇರಿಯ ಅಟಲ್ ಜಿ ಜನಸ್ನೇಹಿ ಕೇಂದ್ರಗಳಲ್ಲಿ ಚುನಾವಣಾ ಗುರುತಿನ ಚೀಟಿ ಅಥವಾ ಆಧಾರ್ ಗುರುತಿನ ಚೀಟಿ ನೀಡಿ ಶುಲ್ಕವನ್ನು ಪಾವತಿಸಿ ವಿಶಿಷ್ಟ ಅರ್ಜಿ ಸಂಖ್ಯೆಯನ್ನು (Application ID) ಹೊಂದಿರುವ ಸ್ವೀಕೃತಿ ಪತ್ರ ಪಡೆಯಬೇಕು.

**ಹಂತ 3:–** ಶುಲ್ಕ ಪಾವತಿಸಿದ ಸ್ವೀಕೃತಿ ಪತ್ರದಲ್ಲಿನ ವಿಶಿಷ್ಟ ಅರ್ಜಿ ಸಂಖ್ಯೆ (Application ID) ಯನ್ನು ಆನ್ ಲೈನ್ ಅರ್ಜಿಯ USER ID ಅಂಕಣದಲ್ಲಿ ಭರ್ತಿ ಮಾಡಿ ಶುಲ್ಕ ಪಾವತಿಸುವ ಸಂದರ್ಭದಲ್ಲಿ ಹಾಜರುಪಡಿಸುವ ಚುನಾವಣಾ ಗುರುತಿನ ಚೀಟಿ ಅಥವಾ ಆಧಾರ್ ಗುರುತಿನ ಚೀಟಿಯ ಸಂಖ್ಯೆಯನ್ನು PASSWORD ಅಂಕಣದಲ್ಲಿ ಭರ್ತಿ ಮಾಡಬೇಕು. ನಂತರ Submit ಬಟನ್ ಒತ್ತಿದರೆ ಆನ್ ಲೈನ್ ಅರ್ಜಿ ಪ್ರದರ್ಶಿತವಾಗುತ್ತದೆ.

**ಹಂತ 4:–** ಆನ್ ಲೈನ್ ಅರ್ಜಿ ಸಲ್ಲಿಸುವ ಮೊದಲು ಅಭ್ಯರ್ಥಿಯ ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಬಿಳಿ ಹಾಳೆಯ ಮೇಲೆ ಅಂಟಿಸಿ, ಭಾವಚಿತ್ರದ ಕೆಳಗೆ (ಹಾಳೆಯ ಮೇಲೆ) ಪೂರ್ಣ ಸಹಿ ಮಾಡಿದ ನಂತರ ಸ್ಕ್ಯಾನ್ ಮಾಡಿ ಅಪ್ ಲೋಡ್ ಮಾಡಲು (size 10 to 50 KB) ಸಿದ್ಧತೆ ಮಾಡಿಕೊಳ್ಳಬೇಕು. ಅರ್ಜಿ ತೆರೆಯುವ ಮೊದಲು ಭಾವಚಿತ್ರ ಹಾಗೂ ಸಹಿಯ ಸ್ಕ್ಯಾನಿಂಗ್ ಕಾರ್ಯ ಪೂರ್ಣಗೊಳಿಸಬೇಕು ಮತ್ತು ಅದರ ಸೈಜ್ ನ್ನು ಕಡ್ಡಾಯವಾಗಿ ಖಾತರಿಪಡಿಸಿಕೊಳ್ಳಬೇಕು.

**ಹಂತ 5:–** ಆನ್ ಲೈನ್ ಅರ್ಜಿಯು ಎರಡು ಪುಟವಿದ್ದು ಮೊದಲನೆಯ ಪುಟವನ್ನು ಭರ್ತಿ ಮಾಡಿದ ನಂತರ Next ಬಟನ್ ಒತ್ತಿದರೆ ಎರಡನೆಯ ಪುಟ ಪ್ರದರ್ಶಿತವಾಗುತ್ತದೆ. ಎರಡನೆಯ ಪುಟವನ್ನು ಭರ್ತಿ ಮಾಡಿದ ನಂತರ Proceed ಬಟನ್ ಒತ್ತಿದರೆ ಭರ್ತಿಯಾದ ಸಂಪೂರ್ಣ ಅರ್ಜಿ ಪ್ರದರ್ಶಿತವಾಗುತ್ತದೆ. ಯಾವುದೇ ತಿದ್ದುಪಡಿ ಇದ್ದಲ್ಲಿ EDIT ಬಟನ್ ಒತ್ತಿ ಸಂಬಂಧಿಸಿದ ಅಂಕಣಗಳಲ್ಲಿ ಮಾಹಿತಿಯನ್ನು ಸರಿಪಡಿಸಿದ ನಂತರ Proceed ಬಟನ್ ಒತ್ತಿದರೆ ಪ್ರದರ್ಶಿತವಾಗುವ ಅರ್ಜಿಯಲ್ಲಿನ ಎಲ್ಲಾ ಮಾಹಿತಿಯನ್ನು ಸರಿ ಇದೆ ಎಂದು ಖಾತರಿಪಡಿಸಿಕೊಂಡು, ಅಂತಿಮವಾಗಿ ಇರುವ ಘೋಷಣೆ (DECLARATION) ಯನ್ನು ಕಡ್ಡಾಯವಾಗಿ ಓದಿಕೊಂಡು ಚೌಕದಲ್ಲಿ ಕ್ಲಿಕ್ ಮಾಡಿದಾಗ ☑ ಎಂದು ಮೂಡುತ್ತದೆ. ಈ ರೀತಿ ಚೌಕದಲ್ಲಿ ಕ್ಲಿಕ್ ಮಾಡಿದಾಗ ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ಮಾಹಿತಿಗಳು ಸರಿ ಇದೆ ಎಂದು ಒಪ್ಪಿ ದೃಢೀಕರಿಸಿದಂತೆ ಎಂದು ಭಾವಿಸಲಾಗುತ್ತದೆ. ಅಲ್ಲದೆ ಅರ್ಜಿ ಸಲ್ಲಿಸಲು ಅಗತ್ಯವಿರುವ ಹೈಡ್ ಆಗಿದ್ದ Submit ಬಟನ್ ತೆರೆಯುತ್ತದೆ. Submit ಬಟನ್ ಒತ್ತಿದಾಗ ಆನ್ ಲೈನ್ ಅರ್ಜಿ ಸಲ್ಲಿಸುವ ಕ್ರಮ ಪೂರ್ಣಗೊಂಡಂತೆ. ಒಮ್ಮೆ Submit ಬಟನ್ ಒತ್ತಿದ ನಂತರ ಅರ್ಜಿಯಲ್ಲಿನ ಯಾವುದೇ ಮಾಹಿತಿಯನ್ನು ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ. ಆದುದರಿಂದ Submit **ಬಟನ್ ಒತ್ತುವ ಮೊದಲು, ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ಮಾಹಿತಿಯನ್ನು ಖಾತರಿಪಡಿಸಿಕೊಂಡು, ನಂತರ** Submit **ಬಟನ್ ಒತ್ತಬೇಕು.**

**ಹಂತ 6:–** ಆನ್ ಲೈನ್ ಅರ್ಜಿಯನ್ನು ಸಂಪೂರ್ಣವಾಗಿ ಭರ್ತಿ ಮಾಡಿ Submit ಮಾಡಿದ ನಂತರ ಪರದೆಯ ಮೇಲೆ ಮೂಡಿರುವ Print ಬಟನ್ ನ್ನು ಒತ್ತಬೇಕು. ಆಗ ಆನ್ ಲೈನ್ ಅರ್ಜಿಯ Print Preview ಮೂಡುತ್ತದೆ. Print ಬಟನನ್ನು ಒತ್ತಿ ಆನ್ ಲೈನ್ ಅರ್ಜಿಯ ಪ್ರತಿಯನ್ನು ಪಡೆಯಬೇಕು. ಅರ್ಜಿಯನ್ನು Print ತೆಗೆದುಕೊಂಡ ನಂತರ Exit ಬಟನನ್ನು ಒತ್ತಬೇಕು.

- ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡುವ ಮೊದಲು ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯ ದಾಖಲೆಗಳನ್ನು ಮತ್ತು ಮೀಸಲಾತಿ ಕೋರುವ ಸಂಬಂಧದ ದಾಖಲೆಗಳನ್ನು ಪರಿಶೀಲಿಸಿ ಎಲ್ಲಾ ದಾಖಲೆಗಳನ್ನು ಭರ್ತಿ ಮಾಡುವ ಸಂದರ್ಭದಲ್ಲಿ ನಿಮ್ಮ ಹತ್ತಿರ ಇಟ್ಟುಕೊಂಡು ಭರ್ತಿ ಮಾಡುವುದು ಸೂಕ್ತವಾಗಿರುತ್ತದೆ.
- ಅರ್ಜಿಯನ್ನು Submit ಮಾಡಿದ ನಂತರ ಯಾವುದೇ ತಿದ್ದುಪಡಿಗಳಿಗೆ ಅವಕಾಶವಿರುವುದಿಲ್ಲ.
- ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ, ಮುಂಚಿತವಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.
- ಮೂಲ ದಾಖಲೆಗಳ ಪರಿಶೀಲನೆಗೆ ಹಾಜರಾಗುವ ಸಂದರ್ಭದಲ್ಲಿ ಅಭ್ಯರ್ಥಿಯು ಪಡೆದಿರುವ ಅರ್ಜಿಯ ಪ್ರತಿಯನ್ನು ಕಡ್ಡಾಯವಾಗಿ ಹಾಜರುಪಡಿಸಬೇಕು.

**ವಿಶೇಷ ಸೂಚನೆ:–** ಆನ್ ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (HELP LINE) ಸಂಖ್ಯೆ: 080 – 22212507 / 22214554 ನ್ನು ಸರ್ಕಾರಿ ರಜಾ ದಿನ ಹೊರತುಪಡಿಸಿ ಕಛೇರಿಯ ವೇಳೆಯಲ್ಲಿ ಬೆಳಗ್ಗೆ 10–00 ರಿಂದ ಸಂಜೆ 05–30 ರವರೆಗೆ ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆಯಬಹುದಾಗಿದೆ.

9. **ಅರ್ಹತಾ ಷರತ್ತುಗಳು:–**

   a. ಭಾರತೀಯ ನಾಗರಿಕನಾಗಿರತಕ್ಕದ್ದು.

b. ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಅಥವಾ ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ಇದ್ದಲ್ಲಿ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

c. ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರು ನೇಮಕಾತಿಯಾದ ಹುದ್ದೆಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಅಡಚಣೆ ಉಂಟು ಮಾಡುವ ಸಂಭವವಿರುವ ಯಾವುದೇ ದೈಹಿಕ / ಮಾನಸಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

d. ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

10. ಭೂಮಾಪಕರ **ಹುದ್ದೆಗೆ ಆಯ್ಕೆ ವಿಧಾನ:–**

**(1) ಭೂಮಾಪಕರ ಹುದ್ದೆಗೆ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಆಯ್ಕೆ ಮಾಡಲಾಗುವುದು.**

ಈ ಹುದ್ದೆಗೆ 02 ವಿಷಯಗಳಲ್ಲಿ ತಲಾ 200 ಅಂಕಗಳಿಗೆ ವಸ್ತುನಿಷ್ಠ ಬಹು ಆಯ್ಕೆಯ (Objective Multiple Choices) ಪ್ರತ್ಯೇಕ ಪರೀಕ್ಷೆಗಳನ್ನು Online / Offline ನಲ್ಲಿ ನಡೆಸಲಾಗುವುದು. ಪರೀಕ್ಷಾ ದಿನಾಂಕ ಪ್ರಕಟಿಸುವ ಸಂದರ್ಭದಲ್ಲಿ ಪೂರ್ಣ ಮಾಹಿತಿಯನ್ನು ನೀಡಲಾಗುವುದು. ಅಭ್ಯರ್ಥಿಗಳು ಈ ಪರೀಕ್ಷೆಯಲ್ಲಿ ಪಡೆಯುವ ಅಂಕಗಳ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡಲಾಗುವುದು. **ಈ ಹುದ್ದೆಯ ಆಯ್ಕೆಗೆ ಯಾವುದೇ ಸಂದರ್ಶನ ಇರುವುದಿಲ್ಲ.**

(2) ಸ್ಪರ್ಧಾತ್ಮಕ ಪರೀಕ್ಷೆ ವಿವರ:– (ಎಸ್.ಎಸ್.ಎಲ್.ಸಿ. ಜ್ಞಾನಮಟ್ಟಕ್ಕೆ)

**ಪತ್ರಿಕೆ–1**_(ಸಾಮಾನ್ಯ ಪತ್ರಿಕೆ) – 200 ಅಂಕಗಳು

(General Paper) – ಪರೀಕ್ಷಾ ಕಾಲಾವಧಿ – 02 ಗಂಟೆ

ಈ ಪತ್ರಿಕೆಯು ಕರ್ನಾಟಕದ ಹಾಗೂ ಭಾರತದ ಇತಿಹಾಸ, ರಾಜ್ಯಶಾಸ್ತ್ರ, ಸಾಮಾನ್ಯ ಜ್ಞಾನ ಹಾಗೂ ಇತ್ತೀಚಿನ ವಿದ್ಯಾಮಾನಗಳ ಅರಿವು, ಸಾಮಾನ್ಯ ವಿಜ್ಞಾನ ಹಾಗೂ ದಿನನಿತ್ಯದ ಆಗು–ಹೋಗುಗಳು ಮತ್ತು ಪ್ರಾಯೋಗಿಕ ಜ್ಞಾನದ ಕುರಿತಂತೆ ಪರೀಕ್ಷಾ ಪತ್ರಿಕೆಯಾಗಿರುತ್ತದೆ.

**ಪತ್ರಿಕೆ–2**_(ನಿರ್ದಿಷ್ಟ ಪತ್ರಿಕೆ) – 200 ಅಂಕಗಳು

(Specific Paper) – ಪರೀಕ್ಷಾ ಕಾಲಾವಧಿ – 02 ಗಂಟೆ

ಈ ಪತ್ರಿಕೆಯ ಪಠ್ಯಕ್ರಮವನ್ನು ಅನುಬಂಧ–2 ರಲ್ಲಿ ನೀಡಲಾಗಿದೆ.

**(3) ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ:–**

ಈ ಹುದ್ದೆಗೆ ಆಯ್ಕೆ ಬಯಸುವ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ / ದ್ವಿತೀಯ ಭಾಷೆಯಾಗಿ ಪಡೆದು ತೇರ್ಗಡೆ ಹೊಂದದೆ ಇದ್ದಲ್ಲಿ ಅಂತಹ ಎಲ್ಲಾ ಅಭ್ಯರ್ಥಿಗಳಿಗೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ಎಸ್.ಎಸ್.ಎಲ್.ಸಿ. ಜ್ಞಾನಮಟ್ಟಕ್ಕೆ ಅನುಗುಣವಾಗಿ ಲಿಖಿತ ಪರೀಕ್ಷೆಯನ್ನು ಸ್ಪರ್ಧಾತ್ಮಕ ಪರೀಕ್ಷೆಯೊಂದಿಗೆ ಪ್ರತ್ಯೇಕವಾಗಿ ನಡೆಸಲಾಗುವುದು. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 19 ಎಸ್ ಸೀಆರ್ 2006 ದಿನಾಂಕ: 05.05.2007 ರನ್ವಯ "ಕಡ್ಡಾಯ ಕನ್ನಡ ಭಾಷಾ" ಪರೀಕ್ಷೆಗೆ ಹಾಜರಾಗಿ ಗರಿಷ್ಠ 150 ಅಂಕಗಳಿಗೆ ಕನಿಷ್ಠ 50 ಅಂಕಗಳನ್ನು ಪಡೆದು ತೇರ್ಗಡೆ ಹೊಂದತಕ್ಕದ್ದು. ಈ ಪರೀಕ್ಷೆಯನ್ನು ಬೆಂಗಳೂರು ಕೇಂದ್ರ ಸ್ಥಾನದಲ್ಲಿ ಮಾತ್ರ ನಡೆಸಲಾಗುವುದು. ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿಷಯವನ್ನು ಅನುಬಂಧ–3 ರಲ್ಲಿ ನಮೂದಿಸಿದೆ.

**ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದು. ಆದರೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ನೇಮಕಾತಿ ಮೆರಿಟ್ ಗೆ ಪರಿಗಣಿಸಲಾಗುವುದಿಲ್ಲ.**

**ಸೂಚನೆ:– ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ಬರೆಯಬೇಕಾಗುವ ಅಭ್ಯರ್ಥಿಗಳು ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಸಹ ಬೆಂಗಳೂರು ಕೇಂದ್ರ ಸ್ಥಾನದಲ್ಲಿಯೇ ಬರೆಯತಕ್ಕದ್ದು. ಆದುದರಿಂದ ಎಸ್.ಎಸ್.ಎಲ್.ಸಿ. ಯಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯನ್ನು ಕನ್ನಡವಾಗಿ ಪಡೆಯದ ಎಲ್ಲಾ ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಗಳ ಆಯ್ಕೆಯಲ್ಲಿ ಬೆಂಗಳೂರು ಕೇಂದ್ರವನ್ನೇ ಕಡ್ಡಾಯವಾಗಿ ಆಯ್ಕೆ ಮಾಡಿಕೊಳ್ಳಬೇಕು. ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ಬೆಂಗಳೂರು ಹೊರತಾಗಿ ಬೇರೆ ಕೇಂದ್ರಗಳಲ್ಲಿ ಆಯೋಜಿಸುವುದಿಲ್ಲ.**

11. ತರಬೇತಿ:–

ನೇಮಕಾತಿಯಾದ ಅಭ್ಯರ್ಥಿಗಳು 02 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಹೀಗೆ ನೇಮಕವಾದ ಎಲ್ಲ ಅಭ್ಯರ್ಥಿಗಳೂ ಇಲಾಖೆಯು ನಡೆಸುವ 06 ತಿಂಗಳ ಭೂಮಾಪಕರ ವೃತ್ತಿ ಬುನಾದಿ ತರಬೇತಿಯನ್ನು ಇಲಾಖಾ ತರಬೇತಿ ಸಂಸ್ಥೆಯಲ್ಲಿ ಯಶಸ್ವಿಯಾಗಿ ಪೂರೈಸತಕ್ಕದ್ದು, ಆದರೆ,

ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ.) ಅಥವಾ ಕೇಂದ್ರ ಪ್ರೌಢ ಶಿಕ್ಷಣ ಮಂಡಳಿ ಜರುಗಿಸುವ 12ನೇ ತರಗತಿ (ಸಿ.ಬಿ.ಎಸ್.ಇ.) ಅಥವಾ ಐ.ಸಿ.ಎಸ್.ಇ. ಯ ವಿದ್ಯಾರ್ಹತೆಯ ಮೇಲೆ ನೇಮಕಾತಿ ಹೊಂದಿದ ಅಭ್ಯರ್ಥಿಗಳು 09 ತಿಂಗಳ ಕಾಲ ತರಬೇತಿಯನ್ನು ಪಡೆಯಬೇಕಾಗಿರುತ್ತದೆ.

ಭೂಮಾಪಕರ ವೃತ್ತಿ ಬುನಾದಿ ತರಬೇತಿಯ ನಂತರ ಅಭ್ಯರ್ಥಿಗಳು ಭೂಮಾಪಕರ ವೃತ್ತಿ ಬುನಾದಿ ಪರೀಕ್ಷೆಯಲ್ಲಿ ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು, ಒಂದು ವೇಳೆ ಪ್ರಥಮ ಪ್ರಯತ್ನದಲ್ಲಿ ಉತ್ತೀರ್ಣರಾಗದೇ ಇದ್ದಲ್ಲಿ ಅಂತಹ ಅಭ್ಯರ್ಥಿಗಳಿಗೆ ಮತ್ತೊಂದು ಅವಕಾಶವನ್ನು ನೀಡಲಾಗುತ್ತದೆ. ಆದಾಗ್ಯೂ ತೇರ್ಗಡೆ ಹೊಂದದೇ ಇದ್ದಲ್ಲಿ ಅಂತಹ ಅಭ್ಯರ್ಥಿಗಳನ್ನು ಸೇವೆಯಿಂದ ತೆಗೆದುಹಾಕಲಾಗುವುದು.

12. ವಯೋಮಿತಿ:–

a) ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

i. ಕನಿಷ್ಠ 18 ವರ್ಷ ವಯಸ್ಸು ಪೂರೈಸಿರತಕ್ಕದ್ದು.

ii. ಗರಿಷ್ಠ ವಯೋಮಿತಿ

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| ಪ್ರವರ್ಗ–2ಎ, 2ಬಿ, 3ಎ, 3ಬಿ | 38 ವರ್ಷ |
| ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 | 40 ವರ್ಷ |

**ಟಿಪ್ಪಣಿ:–**

ಅಭ್ಯರ್ಥಿಗಳ ಜನ್ಮ ದಿನಾಂಕವನ್ನು ಅವರ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ.) / ಕ್ಯುಮುಲೇಟಿವ್ ರೆಕಾರ್ಡ್ ನಲ್ಲಿ ನಮೂದಿಸಿರುವಂತೆ ಪರಿಗಣಿಸಲಾಗುವುದು. ಇವುಗಳನ್ನು ಹೊರತುಪಡಿಸಿ ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

b) **a) ii ರಲ್ಲಿ ತಿಳಿಸಿರುವ ಗರಿಷ್ಠ ವಯೋಮಿತಿಯನ್ನು ಈ ಕೆಳಗಿನ ಸಂದರ್ಭಗಳಲ್ಲಿ ತಿಳಿಸಿರುವ ಮಟ್ಟಿಗೆ ಸಡಿಲಿಸಲಾಗುವುದು.**

1) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ, ಗರಿಷ್ಠ ವಯೋಮಿತಿಯನ್ನು ಅವನು / ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು (ಈ ಬಗ್ಗೆ ಪ್ರಮಾಣ ಪತ್ರ ಪಡೆದಿರಬೇಕು)

2) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು / ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

3) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:–**

a. ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ **ಡಿಫೆನ್ಸ್ ಸೆಕ್ಯುರಿಟಿ ಕೋರ್, ಜನರಲ್ ರಿಸರ್ವ್**

**ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ.**

b. ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

4) **ಈ ಕೆಳಕಂಡ ವರ್ಗದ ಅಭ್ಯರ್ಥಿಗಳು ಮಾಜಿ ಸೈನಿಕ ಮೀಸಲಾತಿಗೆ ಅರ್ಹರಿರುತ್ತಾರೆ.**

a. ಮೇಲ್ಕಂಡ ಪ್ಯಾರಾದಲ್ಲಿ ಹೇಳಿರುವಂತೆ ದಳದ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವವರು.

**ಅಥವಾ**

b. ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದ ಸೇವೆಯಿಂದ ಬಿಡುಗಡೆಯಾದವರು.

**ಅಥವಾ**

c. ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

d. ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು

(1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

(2) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

(3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

e. **ಸ್ವಂತ ಕೋರಿಕೆ ಮೇಲೆ ಬಿಡುಗಡೆ ಹೊಂದಿದವರು ಅಥವಾ ದುರ್ನಡತೆಯ ಅಥವಾ ಅಸಾಮರ್ಥ್ಯದ ಕಾರಣದಿಂದ ತೆಗೆದುಹಾಕಿರುವ, ಕರ್ತವ್ಯದಿಂದ ವಜಾ ಮಾಡಿರುವ ವ್ಯಕ್ತಿಗಳು ಮೀಸಲಾತಿಗೆ ಅರ್ಹರಿರುವುದಿಲ್ಲ.**

**ವಿವರಣೆ:–** ಕೇಂದ್ರ ಸಶಸ್ತ್ರ ದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. **ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವಾ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.**

5) ಅಭ್ಯರ್ಥಿಗಳು ನ್ಯಾಷನಲ್ ಕೆಡೆಟ್ ಕಾರ್ಪ್ಸ್ ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರಿವೀಕ್ಷಕನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

6) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಕಾರ್ಯ ನಿರ್ವಹಿಸಿದ್ದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

7) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

8) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957 ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

9) ಅಂಗವಿಕಲ ಅಭ್ಯರ್ಥಿಗಳಿಗೆ 10 ವರ್ಷಗಳು

ಮೇಲೆ ತಿಳಿಸಲಾದಂತಹ ವಯೋಮಿತಿ ಸಡಿಲಿಕೆ ಬಯಸುವ ಅಭ್ಯರ್ಥಿಗಳು ಸಕ್ಷಮ ಪ್ರಾಧಿಕಾರಿಗಳಿಂದ ನೀಡಲ್ಪಟ್ಟ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.

13. **ಜಾತಿ** / ಮೀಸಲಾತಿ **ಪ್ರಮಾಣ ಪತ್ರಗಳು**:–

**ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು**:–

1. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ–ಡಿ ಯಲ್ಲಿ.
2. ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ–ಇ ರಲ್ಲಿ.
3. ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಅಭ್ಯರ್ಥಿಗಳು ನಮೂನೆ–ಎಫ್ ರಲ್ಲಿ

ಸಂಬಂಧಿತ ತಹಶೀಲ್ದಾರ್ ರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ **ಕೊನೆಯ ದಿನಾಂಕದೊಳಗೆ ಪಡೆದಿದ್ದು**, ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.

ವಿವಿಧ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿದ ಮೀಸಲಾತಿ / ವಿನಾಯಿತಿ ಪ್ರಮಾಣ ಪತ್ರಗಳನ್ನೇ ದಾಖಲೆಗಳ ಪರಿಶೀಲನಾ ಸಮಯದಲ್ಲಿ ಹಾಜರುಪಡಿಸತಕ್ಕದ್ದು. ಹಾಜರುಪಡಿಸದಿದ್ದಲ್ಲಿ ಮೀಸಲಾತಿ / ವಿನಾಯಿತಿಯನ್ನು ರದ್ದುಪಡಿಸಿ ಸಾಮಾನ್ಯ ಅಭ್ಯರ್ಥಿಯಂತೆ ಪರಿಗಣಿಸಲಾಗುವುದು.

14. **ಗ್ರಾಮೀಣ ಅಭ್ಯರ್ಥಿ**:–

ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

(1) ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿರತಕ್ಕದ್ದು.

(2) ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಅವರು ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಸೀಲ್ದಾರ್ ರವರಿಂದ ಪಡೆದಿರತಕ್ಕದ್ದು.

(3) ಗ್ರಾಮೀಣ ಮೀಸಲಾತಿ ಕೋರಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ, ಅವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗಿರುತ್ತಾರೆ.

**ಸೂಚನೆ**:– ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2ರ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.

15. **ಕನ್ನಡ** ಮಾಧ್ಯಮ **ಅಭ್ಯರ್ಥಿ**:–

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

16. **ಅಂಗವಿಕಲ ಅಭ್ಯರ್ಥಿ**:–

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್ ಆರ್ 2000 ದಿನಾಂಕ: 03.09.2005 ರಲ್ಲಿ ಅಂಗವಿಕಲರಿಗೆ ನೇಮಕಾತಿಯಲ್ಲಿ ಮೀಸಲಾತಿ ಕಲ್ಪಿಸಿದೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: WCD 348 PHP 2015 ದಿನಾಂಕ: 17.10.2016 ರಂತೆ ಈ ಹುದ್ದೆಗೆ ಚಲನ–ವಲನ ಅಂಗವೈಕಲ್ಯತೆ (One Leg, One Arm) ದುರ್ಬಲ ಶ್ರವಣ ಶಕ್ತಿ (Hearing Impairment) ಮತ್ತು ದುರ್ಬಲ ದೃಷ್ಟಿ (Low Vision) ಹೊಂದಿದ ಶೇಕಡಾ 40ಕ್ಕೆ ಕಡಿಮೆ ಇಲ್ಲದಂತಹ ಅಂಗವೈಕಲ್ಯತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು.

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೇನೆನಿ 2005 ದಿನಾಂಕ: 19.11.2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಮ.ಮ.ಇ.65 ಪಿ.ಹೆಚ್.ಪಿ. 2010 ದಿನಾಂಕ: 18.02.2011 ರಂತೆ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿಯ ವೈದ್ಯಕೀಯ ಪ್ರಾಧಿಕಾರ / ತಾಲ್ಲೂಕು ಮಟ್ಟದ ವೈದ್ಯಕೀಯ ಪ್ರಾಧಿಕಾರ / ಜಿಲ್ಲಾ ಮಟ್ಟದ ವೈದ್ಯಕೀಯ ಪ್ರಾಧಿಕಾರ / ಬೆಂಗಳೂರು ವೈದ್ಯಕೀಯ ಪ್ರಾಧಿಕಾರ ಇವರಿಂದ ಪ್ರಮಾಣ ಪತ್ರವನ್ನು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಈ ಪ್ರಮಾಣ ಪತ್ರವನ್ನು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಅಂಗವಿಕಲ ಮೀಸಲಾತಿಯನ್ನು ರದ್ದುಪಡಿಸಲಾಗುವುದು. **ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು / ಗುರುತಿನ ಚೀಟಿ ಪ್ರತಿಯನ್ನು ಪರಿಗಣಿಸಲು ಬರುವುದಿಲ್ಲ.**

ಈ ಅಂಗವಿಕಲ ಮೀಸಲಾತಿಯಡಿ ಆಯ್ಕೆ ಹೊಂದುವ ಅಭ್ಯರ್ಥಿಗಳು ಈ ನ್ಯೂನತೆಗಳನ್ನು ಹೊಂದಿದ್ದರೂ ಸದರಿ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಅಡ್ಡಿಯುಂಟಾಗದೆಂದು ತಿಳಿಸುವ ದೈಹಿಕ ಅರ್ಹತೆಯ ಪ್ರಮಾಣ ಪತ್ರವನ್ನು ದಾಖಲೆಗಳನ್ನು ಪರಿಶೀಲಿಸುವ ಸಮಯದಲ್ಲಿ ಹಾಜರುಪಡಿಸಬೇಕು.

17. **ಯೋಜನೆಗಳಿಂದ ನಿರಾಶ್ರಿತ ಕುಟುಂಬದ ಅಭ್ಯರ್ಥಿ:–**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸೆನೆನಿ 99 ದಿನಾಂಕ: 23.11.2000 ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅರ್ಹರಾಗಿರುವುದಿಲ್ಲ) ಈ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್ ರವರಿಂದ ನಿಗಧಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ಸೂಚನೆ:–** ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.

18. ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಪ್ರಮಾಣ ಪತ್ರಗಳನ್ನು / ದಾಖಲಾತಿಗಳನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಅಂದರೆ ದಿನಾಂಕ: **09.12.2016** ರೊಳಗೆ ಪಡೆದಿರಬೇಕು ಮತ್ತು ಸಿಂಧುವಾಗಿರಬೇಕು. ಹಾಗೂ ಇಲಾಖೆಯು ಪರಿಶೀಲನೆಗಾಗಿ ಹಾಜರುಪಡಿಸಲು ಸೂಚಿಸಿದಾಗ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮೀಸಲಾತಿಯ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗುವುದು.

- ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಹೊಂದಿರುವ ಬಗ್ಗೆ ಪ್ರಮಾಣ ಪತ್ರಗಳು ಮತ್ತು ಜನ್ಮ ದಿನಾಂಕವನ್ನು ದೃಢೀಕರಿಸುವ ದಾಖಲೆಗಳನ್ನು ಪರಿಶೀಲನಾ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು. ಹಾಜರುಪಡಿಸದಿದ್ದಲ್ಲಿ ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.
- ವಿವಿಧ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿದ್ದ ಮೀಸಲಾತಿ / ವಿನಾಯಿತಿ ಪ್ರಮಾಣ ಪತ್ರಗಳನ್ನೇ ದಾಖಲೆಗಳ ಪರಿಶೀಲನಾ ಸಮಯದಲ್ಲಿ ಹಾಜರುಪಡಿಸತಕ್ಕದ್ದು. ಹಾಜರುಪಡಿಸದಿದ್ದಲ್ಲಿ ಮೀಸಲಾತಿ / ವಿನಾಯಿತಿಯನ್ನು ರದ್ದುಪಡಿಸಿ ಸಾಮಾನ್ಯ ಅಭ್ಯರ್ಥಿಯಂತೆ ಪರಿಗಣಿಸಲಾಗುವುದು.

19. **A. ಪರಿಶೀಲನಾ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:–**

- ಭೂಮಾಪಕರ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯಂತೆ ಅರ್ಜಿಯಲ್ಲಿ ನಮೂದಿಸಿದ ಮೂಲ ಅಂಕಪಟ್ಟಿಗಳು.
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ.) / ಸಂಚಿತ ದಾಖಲೆ (Cumulative Record) ಗಳ ಮೂಲ ಪತ್ರಗಳು.
- ಅರ್ಜಿಯಲ್ಲಿ ನಮೂದಿಸಿರುವ ಆಧಾರ್ ಅಥವಾ ಚುನಾವಣಾ ಗುರುತಿನ ಚೀಟಿ.
- ವಿವಿಧ ಮೀಸಲಾತಿಯನ್ನು ಕೋರಿದಲ್ಲಿ ಮೀಸಲಾತಿಯ ಮೂಲ ಪ್ರಮಾಣ ಪತ್ರಗಳು.

**B. ಮೀಸಲಾತಿ ಹಾಗೂ ವಯೋಮಿತಿ ಸಡಿಲಿಕೆ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:–**

i. ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ.

**ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೇ ಎಂಬುವುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್ ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.

ii. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ–ಡಿ/ಇ/ಎಫ್ ನಲ್ಲಿ ತಹಸೀಲ್ದಾರ್ ರವರಿಂದ ಪಡೆದಿರುವ ಪ್ರಮಾಣ ಪತ್ರ.

iii. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗಧಿತ ಅಂಕಣವನ್ನು ಆಯ್ಕೆ ಮಾಡತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣಾ ಪ್ರಮಾಣ ಪತ್ರ (NO OBJECTION

CERTIFICATE) ವನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರಬೇಕು.

iv. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು ನಮೂನೆ–2 ರಲ್ಲಿ.

v. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.

vi. ಅಂಗವಿಕಲ ಅಭ್ಯರ್ಥಿಗಳು ನಿಗಧಿಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಮಂಡಳಿಯ ಪ್ರಮಾಣ ಪತ್ರ.

vii. ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು, ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

ಈ ಮೇಲಿನ ಅರ್ಹತೆ, ಮೀಸಲಾತಿ ಇತ್ಯಾದಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಜೇಷ್ಠತೆ ಮತ್ತು ಮೀಸಲಾತಿ ಆಧಾರದ ಮೇಲೆ ನೇಮಕಾತಿ ಪ್ರಕ್ರಿಯೆಗೆ ಪರಿಗಣಿಸಲಾಗುವುದು.

20. ಪ್ರಮುಖ ಸೂಚನೆಗಳು:–

i. ಅಭ್ಯರ್ಥಿಗಳು ಅರ್ಜಿಯಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ, ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆಂದು ಕಂಡು ಬಂದ ಅಭ್ಯರ್ಥಿಗಳಿಗೆ ಮಾತ್ರ ಲಿಖಿತ ಪರೀಕ್ಷೆಗೆ ಪ್ರವೇಶ ಪತ್ರಗಳನ್ನು ನೀಡಲಾಗುವುದು. ಆದ್ದರಿಂದ ನಿಗಧಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ.

ii. ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿಗೆ ಸಂಬಂಧಿಸಿದ ದಾಖಲೆಗಳನ್ನು ಮತ್ತು ಕೋರುವ ವಿವಿಧ ಮೀಸಲಾತಿಗೆ ಸಂಬಂಧಿಸಿದ ಪ್ರಮಾಣ ಪತ್ರಗಳನ್ನು ಈ ಹುದ್ದೆಗೆ ನಿಗದಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರತಕ್ಕದ್ದು.

iii. ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ, ಪರೀಕ್ಷಾ ಕೇಂದ್ರ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿ ವಿವರಗಳನ್ನು ಅಂತಿಮವೆಂದು ಭಾವಿಸಿ ಅದರಂತೆ ಪರಿಗಣಿಸಲಾಗುವುದು. ಆ ನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.

iv. ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಇಲಾಖಾ ಮುಖ್ಯಸ್ಥರ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಪ್ರಯತ್ನಿಸಲಾಗುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಸಮಿತಿ ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರವಹಿಸತಕ್ಕದ್ದು.

v. ಈಗಾಗಲೇ ಸೇವೆಯಲ್ಲಿರುವ / ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಪ್ರಚುರಪಡಿಸಲಾದ ಹುದ್ದೆಗಳಿಗೆ ಅರ್ಜಿಗಳನ್ನು ಹಾಕಲು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ಅರ್ಜಿ ಸಲ್ಲಿಸಲು ನಿಗಧಿಪಡಿಸಲಾದ ಕೊನೆಯ ದಿನಾಂಕದೊಳಗೆ ಅರ್ಜಿ ಸಲ್ಲಿಸಲು "ನಿರಾಕ್ಷೇಪಣಾ ಪ್ರಮಾಣ ಪತ್ರ" ವನ್ನು ನಿಗಧಿತ ನಮೂನೆಯಲ್ಲಿ ಪಡೆದುಕೊಂಡಿರತಕ್ಕದ್ದು. ಹಾಗೂ ಪರಿಶೀಲನಾ ಸಮಯದಲ್ಲಿ ಮೂಲ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

vi. ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

vii. ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿ ತೇರ್ಗಡೆ ಹೊಂದದೆ ಇದ್ದಲ್ಲಿ ಅಂತಹ ಅಭ್ಯರ್ಥಿಗಳು (ಸರ್ಕಾರದ ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 19 ಎಸ್ ಸಿಆರ್ 2006 ದಿನಾಂಕ: 05–05–2007) ಇಲಾಖಾ ನೇಮಕಾತಿ ಸಮಿತಿಯು ಎಸ್.ಎಸ್.ಎಲ್.ಸಿ. ಜ್ಞಾನಮಟ್ಟಕ್ಕೆ ನಡೆಸುವ "ಕನ್ನಡ ಕಡ್ಡಾಯ ಭಾಷಾ" ಪರೀಕ್ಷೆಗೆ ಹಾಜರಾಗಿ ಗರಿಷ್ಟ 150 ಅಂಕಗಳಿಗೆ ಕನಿಷ್ಟ 50 ಅಂಕಗಳನ್ನು ಪಡೆಯತಕ್ಕದ್ದು. ಈ ಪರೀಕ್ಷೆಯನ್ನು ಬೆಂಗಳೂರು ಕೇಂದ್ರಸ್ಥಾನದಲ್ಲಿ ಮಾತ್ರ ನಡೆಸಲಾಗುವುದು.

viii. ಸ್ಪರ್ಧಾತ್ಮಕ ಪರೀಕ್ಷೆ, ಆಯ್ಕೆ ಪ್ರಕ್ರಿಯೆ ಮತ್ತು ಸ್ಥಳ ನಿಯುಕ್ತಿಗೆ ಸಂಬಂಧಿಸಿದಂತೆ ಯಾವುದೇ ಮಧ್ಯವರ್ತಿಗಳನ್ನು ಸಂಪರ್ಕಿಸತಕ್ಕದ್ದಲ್ಲ.

21. **ಇಲಾಖೆಯೊಡನೆ ಪತ್ರ ವ್ಯವಹಾರ:–**

ವಿಳಾಸ ಬದಲಾವಣೆ ಇದ್ದಲ್ಲಿ ಮಾತ್ರ ಅಭ್ಯರ್ಥಿಗಳು ಲಿಖಿತ ಮನವಿಯ ಮೂಲಕ ಇಲಾಖಾ ಮುಖ್ಯಸ್ಥರ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಇಲಾಖೆಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಇಲಾಖೆಯು ಯಾವುದೇ

ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ಇಲಾಖೆಯೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಈ ಕೆಳಕಂಡ ಮಾಹಿತಿಗಳು ಒಳಗೊಂಡಿರಬೇಕು.

- ಹುದ್ದೆಯ / ವಿಷಯದ ಹೆಸರು
- ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)
- ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ
- ಅರ್ಜಿ ಸಂಖ್ಯೆ

ಇಲಾಖೆಯು ಅಭ್ಯರ್ಥಿತ್ವದ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ.

22. **ಪ್ರವೇಶ ಪತ್ರ:–**

ಇಲಾಖೆಯಿಂದ ಅಭ್ಯರ್ಥಿಗಳಿಗೆ ಯಾವುದೇ ಸ್ಪರ್ಧಾತ್ಮಕ ಪರೀಕ್ಷಾ ಪ್ರವೇಶ ಪತ್ರವನ್ನು ಅಂಚೆ ಅಥವಾ ಮುದ್ದಾಂ ನೀಡುವುದಿಲ್ಲ. ಇಲಾಖಾ ವೆಬ್ ಸೈಟಿನಲ್ಲಿ ಸ್ಪರ್ಧಾತ್ಮಕ ಪರೀಕ್ಷಾ ವೇಳಾಪಟ್ಟಿ ಮತ್ತು ಪರೀಕ್ಷಾ ಕೇಂದ್ರವನ್ನು 15 ದಿನಗಳ ಮುಂಚಿತವಾಗಿ ಪ್ರಕಟಿಸಲಾಗುವುದು. ಪರೀಕ್ಷೆಗಾಗಿ ಪ್ರವೇಶ ಪತ್ರವನ್ನು ಇಲಾಖಾ ವೆಬ್ ಸೈಟಿನಿಂದ ಡೌನ್ ಲೋಡ್ ಮಾಡಿಕೊಳ್ಳಬೇಕು. ಆದಾಗ್ಯೂ ಸಮಸ್ಯೆ ಉಂಟಾದಲ್ಲಿ ಅಥವಾ ಯಾವುದೇ ಸಂಶಯವಿದ್ದಲ್ಲಿ ಸಹಾಯವಾಣಿ (HELP LINE) ಸಂಖ್ಯೆ: 080 – 22212507 / 22214554 ನ್ನು ಸರ್ಕಾರಿ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10–00 ರಿಂದ ಸಂಜೆ 05–30 ರವರೆಗೆ ಸಂಪರ್ಕಿಸತಕ್ಕದ್ದು.

23. **ಪರೀಕ್ಷಾ ಕೇಂದ್ರಗಳ ಆಯ್ಕೆ:–**

ಸ್ಪರ್ಧಾತ್ಮಕ ಪರೀಕ್ಷೆಗಳನ್ನು 08 ಜಿಲ್ಲಾ ಕೇಂದ್ರಗಳಾದ ಬೆಂಗಳೂರು, ದಾವಣಗೆರೆ . ಮೈಸೂರು, ಮಂಗಳೂರು, ಬೆಳಗಾವಿ, ಧಾರವಾಡ, ಕಲ್ಬುರ್ಗಿ ಮತ್ತು ಬಳ್ಳಾರಿಗಳಲ್ಲಿ ಹಾಗೂ ಇಲಾಖೆಯು ನಿಗಧಿಪಡಿಸುವ ಇತರೆ ಕೇಂದ್ರಗಳಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಅರ್ಜಿಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆಯನ್ನು ತೆಗೆದುಕೊಳ್ಳಲು ಇಚ್ಚಿಸುವ ಕೇಂದ್ರವನ್ನು ಆಯ್ಕೆ ಮಾಡತಕ್ಕದ್ದು. ಪರೀಕ್ಷಾ ಕೇಂದ್ರವನ್ನು ನಿಗಧಿಪಡಿಸುವುದು ಇಲಾಖೆಯ ತೀರ್ಮಾನ ಅಂತಿಮವಾಗಿರುತ್ತದೆ. ಭೂಮಾಪಕರ ಹುದ್ದೆಗೆ ಆಯ್ಕೆ ಬಯಸುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಿಗಧಿಪಡಿಸಿರುವ ಕಾಲಂ ರಲ್ಲಿ ಪರೀಕ್ಷೆ ಬರೆಯಲು ಇಚ್ಚಿಸುವ ಕೇಂದ್ರವನ್ನು ಆಯ್ಕೆ ಮಾಡತಕ್ಕದ್ದು.

24. **ಅನರ್ಹತೆ:–**

ನೇಮಕಾತಿಗಾಗಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಈ ಮುಂದೆ ನಮೂದಿಸಿದಂತೆ ಯಾವುದೇ ರೀತಿಯ ದುರ್ನಡತೆ / ಅಕ್ರಮ / ಅನುಚಿತ ವರ್ತನೆ / ಹಾಗೂ ಸರ್ಕಾರಿ ಸೇವೆಯಿಂದ ವಜಾಗೊಂಡಿದ್ದಲ್ಲಿ ಅಂತಹವರ ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು ಹಾಗೂ ಕ್ರಿಮಿನಲ್ ವ್ಯವಹರಣೆಗಳಿಗೆ ಒಳಪಡಿಸಲಾಗುವುದು.

1. ಯಾವುದೇ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿದ್ದಲ್ಲಿ
2. ಖೋಟಾ ದಸ್ತಾವೇಜು / ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿದ್ದಲ್ಲಿ
3. ತಪ್ಪು ಅಥವಾ ಸುಳ್ಳು ಹೇಳಿಕೆ / ಮಾಹಿತಿ ನೀಡಿದಲ್ಲಿ
4. ವಾಸ್ತವಿಕ ಮಾಹಿತಿಯನ್ನು ಮರೆಮಾಚಿದಲ್ಲಿ
5. ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸಿರುವನೆಂದು ಕಂಡು ಬಂದಲ್ಲಿ; ಅಂತಹವರನ್ನು ಅನರ್ಹಗೊಳಿಸಲಾಗುವುದು.

25. **"ಭೂಮಾಪಕರ" ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆ ಪಟ್ಟಿ:–**

1. ಭೂಮಾಪಕರ ಹುದ್ದೆಗೆ ನಿಗಧಿಪಡಿಸಿದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆಯನ್ನು ನಿರ್ಧರಿಸಲಾಗುವುದು.
2. ಒಬ್ಬರಿಗಿಂತ ಹೆಚ್ಚಿನ ಅಭ್ಯರ್ಥಿಗಳು ಸಮಾನವಾದ ಅಂಕಗಳನ್ನು ಪಡೆದಲ್ಲಿ ಅಂತಹ ಅಭ್ಯರ್ಥಿಗಳ ಅರ್ಹತೆ ಜೇಷ್ಠತೆಯನ್ನು ಜನ್ಮ ದಿನಾಂಕದ ಆಧಾರದ ಮೇಲೆ ನಿರ್ಧರಿಸಲಾಗುವುದು. ಅಂದರೆ, ವಯಸ್ಸಿನಲ್ಲಿ ಹಿರಿಯರಾದವರನ್ನು ಜೇಷ್ಟತೆಯ ಉನ್ನತ ಸ್ಥಾನದಲ್ಲಿ ಇಡಲಾಗುವುದು.
3. ಮೇಲಿನ ಕಂಡಿಕೆಯಡಿಯ (1) ಹಾಗೂ (2) ರಲ್ಲಿರುವಂತೆ ತಯಾರಿಸಲಾದ ಆಯ್ಕೆಪಟ್ಟಿಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಹಾಗೂ ಇತರೆ ಮಾಧ್ಯಮಗಳಲ್ಲಿ ಪ್ರಕಟಿಸಲಾಗುವುದು.

ಈ ಅಧಿಸೂಚನೆಯಲ್ಲಿ ನಮೂದಿಸಿದ ಸರ್ಕಾರದ ಸುತ್ತೋಲೆಗಳನ್ವಯ ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳನ್ನು ಅನುಬಂಧಗಳಲ್ಲಿ ನಮೂದಿಸಲಾಗಿದೆ.

ಅಧ್ಯಕ್ಷರು ನೇಮಕಾತಿ ಸಮಿತಿ
ಹಾಗೂ ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

PR-182
SC-50

## ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.

### ಅಧಿಕೃತ ಜ್ಞಾಪನ

**ಸಂಖ್ಯೆ : ಅಸಂನಿ/ಸಿಆರ್–ನೇಮಕಾತಿ/01(a)/2016–17, ದಿನಾಂಕ:12.07.2016**

**ವಿಷಯ:** ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕಗೊಂಡ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲರ** ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:**

1. ಕರ್ನಾಟಕ ಲೋಕಸೇವಾ ಆಯೋಗದ ಪ್ರಕಟಣೆ ಸಂಖ್ಯೆ: ಪಿಎಸ್‌ಸಿ 1 ಆರ್.ಟಿ.(4) ಬಿ–1/2014 ದಿನಾಂಕ: 25.09.2014.
2. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿ ಅಧಿಸೂಚನೆ ಸಂಖ್ಯೆ: ಪಿ.ಎಸ್.ಸಿ.06 ಆರ್.ಟಿ.ಬಿ. 2014 ದಿನಾಂಕ: 29.06.2016.
3. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ವೈದ್ಯಕೀಯ ಪರೀಕ್ಷೆಗೆ ಒಳಪಡಿಸುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಶಸ್ತ್ರಚಿಕಿತ್ಸಕರಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಮೊ.ದೇ.ವ.ಶಾ/ಪ್ರಾ/ಕೆ.ಪಿ.ಎಸ್.ಸಿ/ನೇ/ಸಿಆರ್–01/2016–17,ದಿನಾಂಕ: 02.07.2016.
4. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಗುಣ ಮತ್ತು ನಡತೆ ಪರಿಶೀಲಿಸಿ ವರದಿ ನೀಡುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಮೊ.ದೇ.ವ.ಶಾ/ಪ್ರಾ/ಕೆ.ಪಿ.ಎಸ್.ಸಿ/ನೇ/ಸಿಆರ್–01/2016–17, ದಿನಾಂಕ: 02.07.2016.
5. ಸಂಖ್ಯೆ : ಅಸಂನಿ/ಸಿಆರ್–ನೇಮಕಾತಿ/01/2016–17, ದಿನಾಂಕ:16.05.2016

ಅಲ್ಪಸಂಖ್ಯಾತರ ನಿರ್ದೇಶನಾಲಯದಲ್ಲಿನ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ನೇಮಕಾತಿ ಕುರಿತಂತೆ ಉಲ್ಲೇಖ (1) ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಪ್ರಕಟಣೆ ಹೊರಡಿಸಲಾಗಿತ್ತು.

ಮುಂದುವರೆಯುತ್ತಾ, ನೇಮಕಾತಿಯ ಎಲ್ಲಾ ಹಂತದ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ ಉಲ್ಲೇಖ (2) ರಂತೆ ಅಂತಿಮ ಅಧಿಸೂಚನೆ ಹೊರಡಿಸಲಾಗಿದ್ದು, ಉಲ್ಲೇಖಿತ ಪತ್ರಗಳು 3 ಹಾಗೂ 4 ರಂತೆ ನೇಮಕಾತಿ ಹೊಂದಿದ ಅಭ್ಯರ್ಥಿಯ ವೈದ್ಯಕೀಯ ಪ್ರಮಾಣ ಪತ್ರ ಹಾಗೂ ಗುಣ ಮತ್ತು ನಡತೆಯ ಪ್ರಮಾಣ ಪತ್ರಗಳಿಗಾಗಿ ಸಂಬಂಧಿತ ಪ್ರಾಧಿಕಾರಗಳಿಗೆ ಪತ್ರಗಳನ್ನು ಬರೆದು, ಎಲ್ಲಾ ಸಂಬಂದಪಟ್ಟ ಪ್ರಮಾಣಪತ್ರಗಳನ್ನು ಸಲ್ಲಿಸಲು ಸೂಚಿಸಲಾಗಿರುತ್ತದೆ. ಉಲ್ಲೇಖ (5)ರಂತೆ ಈಗಾಗಲೆ ಸದರಿ ಹುದ್ದೆಗೆ ನೇಮಕಾತಿ ಆದೇಶವನ್ನು ನೀಡಲಾಗಿದೆ, ಮುಂದುವರೆಯುತ್ತಾ ಅಭ್ಯರ್ಥಿಗೆ ಅಭ್ಯರ್ಥಿಯ ಮೆರಿಟ್ ಹಾಗೂ ವರ್ಗವಾರು ಆಧಾರದ ಮೇಲೆ ಅಭ್ಯರ್ಥಿಯ ಸಹಮತಿಯೊಂದಿಗೆ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲರ ಗ್ರೂಪ್ 'ಬ' ಹುದ್ದೆಗಳಿಗೆ ₹. 22800–43200** ವೇತನಶ್ರೇಣಿಯಲ್ಲಿ ಈ ಕೆಳಕಂಡ ಷರತ್ತುಗೊಳಪಡಿಸಿ, ನೇಮಕಾತಿ ಮಾಡಿ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

| SL NO. | NAME OF THE CANDIDATE | REG.NO.<br>D O B<br>RESVN.<br>QUALIFICATION | School and Place of Appointment and Posting |
|---|---|---|---|
| 1 | BASAVARAJU B C<br>BASAVANAHALLI<br>G D HALLI POST, SIRA TALUK<br>TUMKUR-572125 | 125754<br>01/06/81<br>GM<br>MA B.Ed | Morarji Desai Residential School<br>**Medehalli**<br>Chitradurga Taluk<br>Chitradurga Dist |

**ಈ ನೇಮಕಾತಿಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ**

1. ಸದರಿ ನೇಮಕಾತಿಯು ಕರ್ನಾಟಕ ನಾಗರಿಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗಳು 1977 ರನ್ವಯ 2 ವರ್ಷಗಳ ಖಾಯಂಪೂರ್ವ ಪರೀಕ್ಷಾರ್ಥ ಸೇವಾ ಅವಧಿ ಒಳಪಟ್ಟಿರುತ್ತದೆ. ಖಾಯಂ ಪೂರ್ವ ಅವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸತಕ್ಕದ್ದು.
2. ಸದರಿ ಅಭ್ಯರ್ಥಿಯ ನೇಮಕಾತಿಯು ಮತ್ತು ಸೇವಾ ಸೌಲಭ್ಯಗಳು ಆಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರದ ನಿಯಮಗಳು/ಆದೇಶಗಳ ಅಧೀನಕ್ಕೊಳಪಟ್ಟಿರುತ್ತದೆ.
3. **ಈ ನೇಮಕಾತಿಯ ಆದೇಶ ಪಡೆದ ದಿನಾಂಕದಿಂದ 15 ದಿನಗೊಳಗಾಗಿ ಅಭ್ಯರ್ಥಿಗಳು ನೇಮಕಗೊಂಡ ಸ್ಥಳಕ್ಕೆ ತಪ್ಪದೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.** ನಿಗಧಿತ ದಿನಾಂಕದೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ನೇಮಕಾತಿಯ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೇ ರದ್ದುಗೊಳಿಸಲಾಗುವುದು.
4. **ಈ ಮೇಲ್ಕಂಡ ಅಭ್ಯರ್ಥಿಗಳ ಪೋಲಿಸ್ ವರದಿ, ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಲ್ಲಿಸುವ ಷರತ್ತಿಗೊಳಪಟ್ಟು ಆದೇಶ ನೀಡಲಾಗಿರುತ್ತದೆ ದಾಖಲಾತಿ ಸಲ್ಲಿಸಲು ವಿಫಲರಾಗಿದ್ದಲ್ಲಿ ನೇಮಕಾತಿ ಆದೇಶವನ್ನು ರದ್ದುಪಡಿಸಲಾಗುವುದು.**

5. ಅಭ್ಯರ್ಥಿಯು ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಕರ್ನಾಟಕ ನಾಗರೀಕ ಸೇವಾ (ಕನ್ನಡ ಭಾಷಾ ಪರೀಕ್ಷೆ) 1974 ರನ್ವಯ ಪಾಸು ಮಾಡತಕ್ಕದ್ದು.
6. ಸದರಿ ಅಭ್ಯರ್ಥಿಗೆ ನೇಮಕಾತಿ ಮಾಡಿದ ಸ್ಥಳ ಸೇರಲು ಯಾವುದೇ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ನೀಡಲಾಗುವುದಿಲ್ಲ.
7. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಪೂರ್ವದಲ್ಲಿ, ಅಭ್ಯರ್ಥಿಗೆ ಹಾಗೂ ಅಭ್ಯರ್ಥಿಯ ಕುಟುಂಬಕ್ಕೆ ಸಂಬಂಧಿಸಿದಂತೆ ಸ್ಥಿರ ಮತ್ತು ಚರಾಸ್ಥಿಗಳ ವಿವರ, ಸಾಲಗಳ ಪ್ರಮಾಣ ಪತ್ರ, ಪಾಸ್‌ಪೋರ್ಟ್ ಅಳತೆಯ 2 ಇತ್ತೀಚಿನ ಭಾವಚಿತ್ರ ಮತ್ತು ವಿದ್ಯಾರ್ಹತೆ ಹಾಗೂ ಮೀಸಲಾತಿ ಬಗ್ಗೆ ಇರುವ ಮೂಲ ಪ್ರಮಾಣಪತ್ರ, ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣಪತ್ರ ಹಾಗೂ ಇತರೆ ದಾಖಲಾತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.
8. ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು. ಸರ್ಕಾರದ ಸುತ್ತೋಲೆ ಸಂಖ್ಯೆ : ಕಂಇ/216/ಬಿಎಸ್‌ಸಿ/2013 ದಿನಾಂಕ:22.08.2013 ರಲ್ಲಿ ಸೂಚಿಸಲಾಗಿರುವಂತೆ, ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿಸಿಎ) ನಿಯಮಗಳನ್ವಯ 1957 ರ ಅಡಿಯಲ್ಲಿ ಶಿಸ್ತು ಕ್ರಮಕೈಗೊಳ್ಳಲಾಗುವುದು.
9. ಸದರಿ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ಕೂಡಲೇ ಮಹಾಲೇಖಪಾಲಕರು, ನಿರ್ದೇಶಕರು, ಜಿಲ್ಲಾ ಅಧಿಕಾರಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ/ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಎಲ್ಲಾ ಸಂಬಂಧಪಟ್ಟ ಅಧಿಕಾರಿಗಳಿಗೆ ಸಿ.ಟಿ.ಸಿ.ಯನ್ನು ಕಳುಹಿಸತಕ್ಕದ್ದು.
10. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯಾ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಕಚೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
11. ಆಯ್ಕೆಯಾಗಿರುವ ಅಭ್ಯರ್ಥಿಯು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು, ಮತ್ತು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಂದರ್ಭದಲ್ಲಿ ನೋಟರಿ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು.
12. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು".
13. ಅಭ್ಯರ್ಥಿಯು ಸರ್ಕಾರದ ಆದೇಶ ನಂ. FD/SPL/04/PET/05 ದಿನಾಂಕ: 31.03.2016 ರಂತೆ ಹೊಸ ನಿವೃತ್ತಿ ವೇತನ ಯೋಜನೆಗೆ (NPS) ಒಳಪಟ್ಟಿರುತ್ತಾರೆ. ದಿನಾಂಕ: 01.04.2006 ರ ನಂತರ ಸರ್ಕಾರಿ ಸೇವೆಗೆ ನೇಮಕಗೊಂಡ ನೌಕರರ ಮೂಲ ವೇತನ ಮತ್ತು ತುಟಿಭತ್ಯೆಯ ಒಟ್ಟು ಮೊತ್ತದ ಶೇಕಡಾ 10% ರಷ್ಟು ಭಾಗವನ್ನು ಅವರ ಪ್ರತಿ ಮಾಹೆಯ ವೇತನದಲ್ಲಿ ನಿವೃತ್ತಿ ಸೌಲಭ್ಯದ ವಂತಿಕೆಯನ್ನು ಕಟಾಯಿಸಲಾಗುವುದು.
14. ಅಭ್ಯರ್ಥಿಯು ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ನಾಗರಿಕ ಸೇವೆ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
15. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು, ಹಾಗೂ ಇಲಾಖಾಧಿಕಾರಿಗಳು ನೀಡಿರುವ ನಿರಾಕ್ಷೇಪಣಾ ಪತ್ರವನ್ನು ಸಲ್ಲಿಸತಕ್ಕದ್ದು. ಅಂತಹ ಅಭ್ಯರ್ಥಿಗಳು ಇಲಾಖೆಯಿಂದ ಬಿಡುಗಡೆಯಾಗಿರುವ ಬಗ್ಗೆ ದೃಢೀಕರಣ ಪತ್ರವನ್ನು ಹಾಜರು ಪಡಿಸತಕ್ಕದ್ದು. ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
16. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 154 ಎಸ್.ಸಿ.ಆರ್ 2014 ದಿನಾಂಕ: 27.04.2015ರ ಮೇರೆಗೆ ಅಭ್ಯರ್ಥಿಯು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಿಗಧಿತ ಸಮಯದಲ್ಲಿ ಪಾಸು ಮಾಡತಕ್ಕದ್ದು.
17. ನೇಮಕಾತಿಗೊಳಿಸಿದ ಸ್ಥಳ/ಕಛೇರಿಯನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲಾಗುವುದಿಲ್ಲ. ಸ್ಥಳ ಬದಲಾವಣೆ ಮಾಡುವಂತೆ ಒತ್ತಡ ತಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸಲಾಗುವುದು.
18. ಹೈದ್ರಾಬಾದ್-ಕರ್ನಾಟಕ ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಯ ನೇಮಕಾತಿಯು, ಸಕ್ಷಮ ಪ್ರಾಧಿಕಾರಿಯಿಂದ ಅರ್ಹತಾ ಸಿಂಧುತ್ವ ಪ್ರಮಾಣಪತ್ರ ಸಲ್ಲಿಸುವಿಕೆಯ ನಿರ್ಬಂಧನೆಗೆ ಒಳಪಟ್ಟಿರುತ್ತದೆ.
19. **ಸದರಿ ನೇಮಕಾತಿಯು ಮಾನ್ಯ ಉಚ್ಚ ನ್ಯಾಯಾಲಯದ ಡಬ್ಲ್ಯೂ.ಪಿ ಸಂಖ್ಯೆ: 108694-698/2015 ಹಾಗೂ ಕೆ.ಎ.ಟಿ ಅರ್ಜಿ ಸಂಖ್ಯೆ: 8368-579/2014, 8683-693/2014, 9027-092/2014, 9461-473/2014 ರಗಳ ಹಾಗೂ ಈ ನೇಮಕಾತಿಗೆ ಸಂಬಂಧಿತ ಇತರೆ ಪ್ರಕರಣಗಳ ತೀರ್ಪುಗಳಿಗೆ ಸದರಿ ಆದೇಶವು ಒಳಪಟ್ಟಿರುತ್ತದೆ.**
20. ಕರ್ತವ್ಯ ನಿರ್ವಹಿಸಿದ ಪ್ರಥಮ ಮಾಹೆ ವೇತನವನ್ನು ನಿರ್ದೇಶಕರ ಕಚೇರಿಯಿಂದ ಅನುಮತಿ ಪಡೆದ ನಂತರವೇ ಪಡೆದುಕೊಳ್ಳತಕ್ಕದ್ದು.
21. ಸರ್ಕಾರಿ ಆದೇಶಗಳು, ನಿರ್ದೇಶಕರು, ಜಿಲ್ಲಾಧಿಕಾರಿಗಳು, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ/ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಅಧಿಕಾರಿಗಳು, ಹಾಗೂ ಇತರೆ ಸಂಬಂಧಿತ ಅಧಿಕಾರಿಗಳ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
22. ಅಭ್ಯರ್ಥಿಯ ಜ್ಯೇಷ್ಠತೆಯನ್ನು ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದ ಆಧಾರದ ಮೇಲೆ ಪರಿಗಣಿಸಲಾಗುವುದು.

**P.R. 147**

**SC-500**

**ಅಕ್ರಂ ಪಾಷ ಕೆ.ಎ.ಎಸ್**
ನಿರ್ದೇಶಕರು,
ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.

**ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.**

**ಅಧಿಕೃತ ಜ್ಞಾಪನ**

ಸಂಖ್ಯೆ : ಅಸಂನಿ/ಸಿಆರ್–ನೇಮಕಾತಿ/01(a)/2016–17, ದಿನಾಂಕ : 16.07.2016

**ವಿಷಯ:** ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕಗೊಂಡ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲರ** ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:**

1. ಕರ್ನಾಟಕ ಲೋಕಸೇವಾ ಆಯೋಗದ ಪ್ರಕಟಣೆ ಸಂಖ್ಯೆ: ಪಿಎಸ್‌ಸಿ 1 ಆರ್.ಟಿ.(4) ಬಿ–1/2014 ದಿನಾಂಕ: 25.09.2014.
2. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿ ಅಧಿಸೂಚನೆ ಸಂಖ್ಯೆ: ಪಿ.ಎಸ್.ಸಿ.06 ಆರ್.ಟಿ.ಬಿ. 2014 ದಿನಾಂಕ: 06.01.2016.
3. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್– /2015–16, ದಿನಾಂಕ: 02.02.2016.
4. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ವೈದ್ಯಕೀಯ ಪರೀಕ್ಷೆಗೆ ಒಳಪಡಿಸುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಶಸ್ತ್ರಚಿಕಿತ್ಸಕರಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್–/2015–16,ದಿನಾಂಕ: 04.02.2016.
5. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಗುಣ ಮತ್ತು ನಡತೆ ಪರಿಶೀಲಿಸಿ ವರದಿ ನೀಡುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್– /2015–16, ದಿನಾಂಕ: 04.02.2016.

ಅಲ್ಪಸಂಖ್ಯಾತರ ನಿರ್ದೇಶನಾಲಯದಲ್ಲಿನ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ನೇಮಕಾತಿ ಕುರಿತಂತೆ ಉಲ್ಲೇಖ (1) ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಪ್ರಕಟಣೆ ಹೊರಡಿಸಲಾಗಿತ್ತು.

ಮುಂದುವರೆಯುತ್ತಾ, ನೇಮಕಾತಿಯ ಎಲ್ಲಾ ಹಂತದ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ ಉಲ್ಲೇಖ (2) ರಂತೆ ಅಂತಿಮ ಅಧಿಸೂಚನೆ ಹೊರಡಿಸಲಾಗಿದ್ದು, ಉಲ್ಲೇಖಿತ ಪತ್ರಗಳು 3,4 ಹಾಗೂ 5 ರಂತೆ ನೇಮಕಾತಿ ಹೊಂದಿದ ಅಭ್ಯರ್ಥಿಗಳ ಸಿಂಧುತ್ವ ಪ್ರಮಾಣ ಪತ್ರ, ವೈದ್ಯಕೀಯ ಪ್ರಮಾಣ ಪತ್ರ ಹಾಗೂ ಗುಣ ಮತ್ತು ನಡತೆಯ ಪ್ರಮಾಣ ಪತ್ರಗಳಿಗಾಗಿ ಸಂಬಂಧಿತ ಪ್ರಾಧಿಕಾರಗಳಿಗೆ ಪತ್ರಗಳನ್ನು ಬರೆದು, ಎಲ್ಲಾ ಸಂಬಂದಪಟ್ಟ ಪ್ರಮಾಣಪತ್ರಗಳನ್ನು ಪಡೆಯಲಾಗಿರುತ್ತದೆ. ಆಯ್ಕೆಯಾದ ಅಭ್ಯರ್ಥಿಗಳ ಮೆರಿಟ್ ಹಾಗೂ ವರ್ಗವಾರು ಆಧಾರದ ಮೇಲೆ ಕೌನ್ಸಿಲಿಂಗ್ ಮೂಲಕ ಈ ಕೆಳಕಂಡ ಅಭ್ಯರ್ಥಿಗಳನ್ನು ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲ ಗ್ರೂಪ್ 'ಬಿ' ಹುದ್ದೆಗಳಿಗೆ ₹. 22800–43200** ವೇತನಶ್ರೇಣಿಯಲ್ಲಿ ಈ ಕೆಳಕಂಡ ಷರತ್ತುಗೊಳಪಡಿಸಿ, ಅವರ ಹೆಸರಿನ ಮುಂದೆ ಸೂಚಿಸಲಾಗಿರುವ ಸ್ಥಳಗಳಿಗೆ ನೇಮಕಾತಿ ಮಾಡಿ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

| SL NO. | NAME OF THE CANDIDATE | REG.NO.<br>D O B<br>RESVN.<br>QUALIFICATION | School and Place of Appointment and Posting |
|---|---|---|---|
| 1 | REKHA BARKI<br>S/O NINGAPPA BARKI<br>AT.POST TALLUR, TQ SAVADATTI<br>Belagavi-591117 | 226775<br>01/06/84<br>CAT1/W<br>MA B.Ed | Morarji Desai Residential School<br>**Arkere**<br>Vijayapura Taluk<br>Vijayapura Dist |

**ಈ ನೇಮಕಾತಿಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ**

1. ಸದರಿ ನೇಮಕಾತಿಯು ಕರ್ನಾಟಕ ನಾಗರಿಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗಳು 1977 ರನ್ವಯ 2 ವರ್ಷಗಳ ಖಾಯಂಪೂರ್ವ ಪರೀಕ್ಷಾರ್ಥ ಸೇವಾ ಅವಧಿ ಒಳಪಟ್ಟಿರುತ್ತದೆ. ಖಾಯಂ ಪೂರ್ವ ಅವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸತಕ್ಕದ್ದು.
2. ಸದರಿ ಅಭ್ಯರ್ಥಿಗಳ ನೇಮಕಾತಿಯು ಮತ್ತು ಸೇವಾ ಸೌಲಭ್ಯಗಳು ಆಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರದ ನಿಯಮಗಳು/ಆದೇಶಗಳ ಅಧೀನಕ್ಕೊಳಪಟ್ಟಿರುತ್ತದೆ.
3. **ಈ ನೇಮಕಾತಿಯ ಆದೇಶ ಪಡೆದ ದಿನಾಂಕದಿಂದ 15 ದಿನಗೊಳಗಾಗಿ ಅಭ್ಯರ್ಥಿಗಳು ನೇಮಕಗೊಂಡ ಸ್ಥಳಕ್ಕೆ ತಪ್ಪದೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.** ನಿಗಧಿತ ದಿನಾಂಕದೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ನೇಮಕಾತಿಯ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೇ ರದ್ದುಗೊಳಿಸಲಾಗುವುದು.

4. ಅಭ್ಯರ್ಥಿಗಳು ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಕರ್ನಾಟಕ ನಾಗರೀಕ ಸೇವಾ (ಕನ್ನಡ ಭಾಷಾ ಪರೀಕ್ಷೆ) 1974 ರನ್ವಯ ಪಾಸು ಮಾಡತಕ್ಕದ್ದು.
5. ಸದರಿ ಅಭ್ಯರ್ಥಿಗಳಿಗೆ ನೇಮಕಾತಿ ಮಾಡಿದ ಸ್ಥಳ ಸೇರಲು ಯಾವುದೇ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ನೀಡಲಾಗುವುದಿಲ್ಲ.
6. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಪೂರ್ವದಲ್ಲಿ, ಅಭ್ಯರ್ಥಿಗೆ ಹಾಗೂ ಅಭ್ಯರ್ಥಿಯ ಕುಟುಂಬಕ್ಕೆ ಸಂಬಂಧಿಸಿದಂತೆ ಸ್ಥಿರ ಮತ್ತು ಚರಾಸ್ಥಿಗಳ ವಿವರ, ಸಾಲಗಳ ಪ್ರಮಾಣ ಪತ್ರ, ಪಾಸ್‌ಪೋರ್ಟ್ ಅಳತೆಯ 2 ಇತ್ತೀಚಿನ ಭಾವಚಿತ್ರ ಮತ್ತು ವಿದ್ಯಾರ್ಹತೆ ಹಾಗೂ ಮೀಸಲಾತಿ ಬಗ್ಗೆ ಇರುವ ಮೂಲ ಪ್ರಮಾಣಪತ್ರ, ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣಪತ್ರ ಹಾಗೂ ಇತರೆ ದಾಖಲಾತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.
7. ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು. ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ/216/ಬಿಎಸ್‌ಸಿ/2013 ದಿನಾಂಕ:22.08.2013 ರಲ್ಲಿ ಸೂಚಿಸಲಾಗಿರುವಂತೆ, ಅಂತಹ ಅಭ್ಯರ್ಥಿಯ ವಿರುದ್ದ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿಸಿಎ) ನಿಯಮಗಳಯ 1957 ರ ಅಡಿಯಲ್ಲಿ ಶಿಸ್ತು ಕ್ರಮಕೈಗೊಳ್ಳಲಾಗುವುದು.
8. ಸದರಿ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ಕೂಡಲೇ ಮಹಾಲೇಖಪಾಲಕರು, ನಿರ್ದೇಶಕರು, ಜಿಲ್ಲಾ ಅಧಿಕಾರಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ/ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಎಲ್ಲಾ ಸಂಬಂಧಪಟ್ಟ ಅಧಿಕಾರಿಗಳಿಗೆ ಸಿ.ಟಿ.ಸಿ.ಯನ್ನು ಕಳುಹಿಸತಕ್ಕದ್ದು.
9. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯಾ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಕಚೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
10. ಆಯ್ಕೆಯಾಗಿರುವ ಅಭ್ಯರ್ಥಿಯು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು, ಮತ್ತು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಂದರ್ಭದಲ್ಲಿ ನೋಟರಿ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು.
11. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು".
12. ಅಭ್ಯರ್ಥಿಯು ಸರ್ಕಾರದ ಆದೇಶ ನಂ. FD/SPL/04/PET/05 ದಿನಾಂಕ : 31.03.2016 ರಂತೆ ಹೊಸ ನಿವೃತ್ತಿ ವೇತನ ಯೋಜನೆಗೆ (NPS) ಒಳಪಟ್ಟಿರುತ್ತಾರೆ. ದಿನಾಂಕ: 01.04.2006 ರ ನಂತರ ಸರ್ಕಾರಿ ಸೇವೆಗೆ ನೇಮಕಗೊಂಡ ನೌಕರರ ಮೂಲ ವೇತನ ಮತ್ತು ತುಟಿಭತ್ಯೆಯ ಒಟ್ಟು ಮೊತ್ತದ ಶೇಕಡಾ 10% ರಷ್ಟು ಭಾಗವನ್ನು ಅವರ ಪ್ರತಿ ಮಾಹೆಯ ವೇತನದಲ್ಲಿ ನಿವೃತ್ತಿ ಸೌಲಭ್ಯದ ವಂತಿಕೆಯನ್ನು ಕಟಾಯಿಸಲಾಗುವುದು.
13. ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
14. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು, ಹಾಗೂ ಇಲಾಖಾಧಿಕಾರಿಗಳು ನೀಡಿರುವ ನಿರಾಕ್ಷೇಪಣಾ ಪತ್ರವನ್ನು ಸಲ್ಲಿಸತಕ್ಕದ್ದು. ಅಂತಹ ಅಭ್ಯರ್ಥಿಗಳು ಇಲಾಖೆಯಿಂದ ಬಿಡುಗಡೆಯಾಗಿರುವ ಬಗ್ಗೆ ದೃಢೀಕರಣ ಪತ್ರವನ್ನು ಹಾಜರು ಪಡಿಸತಕ್ಕದ್ದು. ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
15. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ154 ಎಸ್.ಸಿ.ಆರ್ 2014 ದಿನಾಂಕ: 27.04.2015ರ ಮೇರೆಗೆ ಅಭ್ಯರ್ಥಿಯು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಿಗಧಿತ ಸಮಯದಲ್ಲಿ ಪಾಸು ಮಾಡತಕ್ಕದ್ದು.
16. ನೇಮಕಾತಿಗೊಳಿಸಿದ ಸ್ಥಳ/ಕಛೇರಿಯನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲಾಗುವುದಿಲ್ಲ. ಸ್ಥಳ ಬದಲಾವಣೆ ಮಾಡುವಂತೆ ಒತ್ತಡ ತಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸಲಾಗುವುದು.
17. ಹೈದ್ರಾಬಾದ್-ಕರ್ನಾಟಕ ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿಯು, ಸಕ್ಷಮ ಪ್ರಾಧಿಕಾರಿಯಿಂದ ಅರ್ಹತಾ ಸಿಂಧುತ್ವ ಪ್ರಮಾಣಪತ್ರ ಸಲ್ಲಿಸುವಿಕೆಯ ನಿರ್ಬಂಧನೆಗೆ ಒಳಪಟ್ಟಿರುತ್ತದೆ.
18. ಸದರಿ ನೇಮಕಾತಿಯು ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ: 5933/2016, 201110/2016, 53860/2015, 5026/2016, 22925/2016, 27664–27680/2016, 110402/2015, ಹಾಗೂ ಕೆ.ಎ.ಟಿ ಅರ್ಜಿ ಸಂಖ್ಯೆ: 8368–579/2014, 8683–693/2014, 9027–92/2014, 9461–73/2014, 9496/2014, 4612/2015 ರಗಳ ಹಾಗೂ ಈ ನೇಮಕಾತಿಗೆ ಸಂಬಂಧಿತ ಇತರೆ ಪ್ರಕರಣಗಳ ತೀರ್ಪುಗಳಿಗೆ ಸದರಿ ಆದೇಶವು ಒಳಪಟ್ಟಿರುತ್ತದೆ.
19. ಕರ್ತವ್ಯ ನಿರ್ವಹಿಸಿದ ಪ್ರಥಮ ಮಾಹೆ ವೇತನವನ್ನು ನಿರ್ದೇಶಕರ ಕಚೇರಿಯಿಂದ ಅನುಮತಿ ಪಡೆದ ನಂತರವೇ ಪಡೆದುಕೊಳ್ಳತಕ್ಕದ್ದು.
20. ಸರ್ಕಾರಿ ಆದೇಶಗಳು, ನಿರ್ದೇಶಕರು, ಜಿಲ್ಲಾಅಧಿಕಾರಿಗಳು, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ/ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಅಧಿಕಾರಿಗಳು, ಹಾಗೂ ಇತರೆ ಸಂಬಂಧಿತ ಅಧಿಕಾರಿಗಳ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
21. ಅಭ್ಯರ್ಥಿಗಳ ಜ್ಯೇಷ್ಠತೆಯನ್ನು ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದ ಆಧಾರದ ಮೇಲೆ ಪರಿಗಣಿಸಲಾಗುವುದು.

**P.R. 148**

**SC-500**

**ಅಕ್ರಂ ಪಾಷ ಕೆ.ಎ.ಎಸ್**
ನಿರ್ದೇಶಕರು,
ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಕರ್ನಾಟಕ ಲೋಕ ಸೇವಾ ಆಯೋಗ**

**"ಉದ್ಯೋಗ ಸೌಧ, ಬೆಂಗಳೂರು**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಪಿಎಸ್‌ಸಿ 01 ಆರ್‌ಟಿಬಿ–1/2016, ದಿನಾಂಕ : 21–09–2016.**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಸೂಚನೆ ಸಂಖ್ಯೆ : ಪಿಎಸ್‌ಸಿ 1 ಆರ್‌ಟಿಬಿ–2/2016, ದಿನಾಂಕ : 24–08–2016 ರಲ್ಲಿ ಮೀನುಗಾರಿಕೆ ಇಲಾಖೆಯಲ್ಲಿನ ಸಹಾಯಕ ಮೀನುಗಾರಿಕೆ ನಿರ್ದೇಶಕರು (ಶ್ರೇಣಿ–2) 39+01 (ಬ್ಯಾ.ಲಾ)+08(ಹೈಕ) ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ವರ್ಗೀಕರಣದ ಉಳಿದ ಮೂಲ ವೃಂದದ ಒಟ್ಟು 39 ಹುದ್ದೆಗಳಲ್ಲಿ ಸಾಮಾನ್ಯ ಅರ್ಹತೆಯ 01 ಅಂಗವಿಕಲ ಹುದ್ದೆಯನ್ನು ಅಂಧ ಅಭ್ಯರ್ಥಿಗಳಿಗೆ ಮೀಸಲಿಡಲಾಗಿತ್ತು. ಆದರೆ ಇಲಾಖೆಯವರ ದಿನಾಂಕ : 20–09–2016ರ ಪತ್ರದಲ್ಲಿನ ಕೋರಿಕೆಯಂತೆ ಅಂಗವಿಕಲರಿಗೆ ಮೀಸಲಿಟ್ಟ ಹುದ್ದೆಯನ್ನು ಚಲನವಲನ ವೈಕಲ್ಯತೆ (OL, OA, OAL, BL) ಅಭ್ಯರ್ಥಿಗಳಿಗೆ ಮೀಸಲಿಟ್ಟು, ಅರ್ಹ ಚಲನವಲನ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಈ ಹುದ್ದೆಗೆ ಗುರುತಿಸಿದ ಇತರೆ ಅಂಗವಿಕಲತೆಗಳಾದ ಅಂಧ ಹಾಗೂ ಶ್ರವಣ ದೋಷದ ಅಭ್ಯರ್ಥಿಗಳಿಂದ ಭರ್ತಿಮಾಡಲಾಗುವುದರಿಂದ ಈ ಅಂಗವಿಕಲತೆಯುಳ್ಳ ಅಭ್ಯರ್ಥಿಗಳಿಗೂ ಅರ್ಜಿ ಸಲ್ಲಿಸಲು ಅವಕಾಶ ನೀಡಲಾಗಿದೆ.

**P.R. 151**

**SC-30**

ಕಾರ್ಯದರ್ಶಿಯವರ ಅನುಮೋದನೆಯ ಮೇರೆಗೆ
**ತೆರೆಸ ಹೂವರ್**
ಸಹಾಯಕ ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.